KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮೇ ೨೦, ೨೦೧೦ (ವೈಶಾಖ ೩೦, ಶಕ ವರ್ಷ ೧೯೩೨) | ಸಂಚಿಕೆ ೨೦ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಶಿವಮೊಗ್ಗಜಿಲ್ಲೆ, ಶಿವಮೊಗ್ಗ**

**ಸಂಖ್ಯೆ:ಡಿಆರ್‌ಎಸ್/ಸಮಾಪನೆ/48/2009–10/1607, ದಿನಾಂಕ:1ನೇ ಫೆಬ್ರವರಿ, 2010**

**ವಿಷಯ:** ವಿಶ್ವೇಶ್ವರಯ್ಯ ಐರನ್ ಅಂಡ್ ಸ್ಟೀಲ್ ಲಿ. ಆಫೀಸರ್ಸ್ ಕನ್ಸೂಮರ್ಸ್ ಕೋ ಆಪರೇಟಿವ್ ಸೊಸೈಟಿ ಲಿ. ಭದ್ರಾವತಿ ಈ ಸಂಘದ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**1) ಸಂಘದ ಗೌರವ ಕಾರ್ಯದರ್ಶಿಯವರ ಪತ್ರ ದಿನಾಂಕ:27.01.2010.

2) ಸಂಘದ 2008–09ನೇ ಸಾಲಿನ ವಾರ್ಷಿಕ ಮಹಾಸಭೆಯ ತೀರ್ಮಾನದ ದಿನಾಂಕ:30.09.2009.

**ಪ್ರಸ್ತಾವನೆ:**

ಉಲ್ಲೇಖ:(1) ಪತ್ರದಲ್ಲಿ ವಿಶ್ವೇಶ್ವರಯ್ಯ ಐರನ್ ಅಂಡ್ ಸ್ಟೀಲ್ ಲಿ. ಆಫೀಸರ್ಸ್ ಕನ್ಸೂಮರ್ಸ್ ಕೋಆಪರೇಟಿವ್ ಸೊಸೈಟಿ ಲಿ. ಭದ್ರಾವತಿ, ಇದರ ಸಮಾಪನೆಗೆ ಸಂಘದ ಗೌರವ ಕಾರ್ಯದರ್ಶಿಯವರು ಪ್ರಸ್ತಾವೆ ಸಲ್ಲಿಸಿರುತ್ತಾರೆ. ಸಂಘದ ಸದಸ್ಯರುಗಳು ವಿ.ಐ.ಎಸ್.ಎಲ್. ಸಂಸ್ಥೆಯ ಅಧಿಕಾರಿಗಳಾಗಿರುತ್ತಾರೆ. ಇವರು ಎ.ಪಿ.ಎಲ್. ಕಾರ್ಡ್ ಹೊಂದಿರುವುದರಿಂದ ಸರ್ಕಾರದಿಂದ ಯಾವುದೇ ಪ್ರಯೋಜನಗಳು ದೊರೆಯುತ್ತಿಲ್ಲ. ಸಂಘವು ಕೇವಲ ವಿ.ಐ.ಎಸ್.ಎಲ್.ಕ್ಯಾಂಟಿನ್ ಮತ್ತು ಗೆಸ್ಟ್‌ಹೌಸ್‌ಗೆ ಮಾತ್ರ ಕೆಲವೇ ವಸ್ತುಗಳನ್ನು ಸರಬರಾಜು ಮಾಡುತ್ತಿದ್ದು ಸಂಘವನ್ನು ಅಭಿವೃದ್ಧಿ ಪಥದಲ್ಲಿ ನಡೆಸುವಷ್ಟು ಲಾಭ ಗಳಿಸುತ್ತಿರುವುದಿಲ್ಲ. ಸಂಘದಲ್ಲಿ ಸದಸ್ಯರುಗಳಿಂದ ವೈಯಕ್ತಿಕ ಖರೀದಿ ತುಂಬಾ ಇಳಿಮುಖವಾಗಿದೆ. ಕ್ಯಾಂಟಿನ್ ಮತ್ತು ಗೆಸ್ಟ್‌ಹೌಸ್‌ಗೆ ಪೈಪೋಟಿ ವ್ಯವಹಾರದಲ್ಲಿ ಕನಿಷ್ಟದರದಲ್ಲಿ ವಸ್ತುಗಳನ್ನು ಸರಬರಾಜು ಮಾಡಲು ಸಾಧ್ಯವಾಗುತ್ತಿಲ್ಲ. ಪ್ರಯುಕ್ತ ಈ ಸಂಘವನ್ನು ನಷ್ಟದಲ್ಲಿ ನಡೆಸುವುದು ಸೂಕ್ತವಾಗಿರುವುದಿಲ್ಲ. ಪ್ರಯುಕ್ತ ಸಂಘದ ಎಲ್ಲಾ ವ್ಯವಹಾರಗಳನ್ನು ಸ್ಥಗಿತಗೊಳಿಸಿ ಸಮಾಪನೆಗೊಳಿಸಲು ದಿನಾಂಕ:30.09.2009 ರಂದು ನಡೆದ 2008–09ನೇ ಸಾಲಿನ ವಾರ್ಷಿಕ ಮಹಾಸಭೆಯಲ್ಲಿ ಸರ್ವಾನುಮತದಿಂದ ತೀರ್ಮಾನಿಸಲಾಗಿದೆ. ಆದ್ದರಿಂದ ಈ ಸಂಘವನ್ನು ಸಮಾಪನೆಗೊಳಿಸಲು ಸಂಘದ ಗೌರವ ಕಾರ್ಯದರ್ಶಿಗಳು ಉಲ್ಲೇಖ (1)ರಲ್ಲಿ ಸಮಾಪನೆಗೊಳಿಸಲು ವಾರ್ಷಿಕ ಮಹಾಸಭೆಯ ನಡವಳಿಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ವಾರ್ಷಿಕ ಸರ್ವಸದಸ್ಯರ ತೀರ್ಮಾನ ಮತ್ತು ಸಂಘದ ಗೌರವ ಕಾರ್ಯದರ್ಶಿಯವರ ಕೋರಿಕೆಯನ್ನು ಪರಿಗಣಿಸಿ ಈ ಸಹಕಾರ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/ ದಿನಾಂಕ:21.11.2001 ರಲ್ಲಿ ದತ್ತವಾದ ಅಧಿಕಾರದನ್ವಯ, ಸಿ.ಎನ್. ದೇವರಾಜ್, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗಜಿಲ್ಲೆ, ಶಿವಮೊಗ್ಗ ಆದ ನಾನು, ವಿಶ್ವೇಶ್ವರಯ್ಯ ಐರನ್ ಅಂಡ್ ಸ್ಟೀಲ್ ಲಿ. ಆಫೀಸರ್ಸ್ ಕನ್ಸೂಮರ್ಸ್ ಕೋಆಪರೇಟಿವ್ ಸೊಸೈಟಿ ಲಿ. ಭದ್ರಾವತಿ ಈ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73 ರನ್ವಯ ಸಮಾಪನಾಧಿಕಾರಿಯಾಗಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಭದ್ರಾವತಿ ಇವರನ್ನು ನೇಮಕ ಮಾಡಲಾಗಿದೆ. ಸಮಾಪನಾಧಿಕಾರಿಯವರು ಈ ಆದೇಶದ 30 ದಿನಗಳೊಳಗಾಗಿ ಸಂಘದ ಪ್ರಭಾರವನ್ನು ಪಡೆದು ನಡವಳಿಕೆ ನಡೆಸತಕ್ಕದ್ದು. ಈ ಆದೇಶವನ್ನು ಈ ದಿನ ದಿನಾಂಕ ಒಂದನೇ ಫೆಬ್ರವರಿ 2010 ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಸಿ.ಎನ್. ದೇವರಾಜ್**
ಸಹಕಾರ ಸಂಘಗಳ ಉಪನಿಬಂಧಕರು,
ಶಿವಮೊಗ್ಗಜಿಲ್ಲೆ, ಶಿವಮೊಗ್ಗ.

ಪಿ.ಆರ್.281

## ವಾಣಿಜ್ಯ ತೆರಿಗೆ ಇಲಾಖೆ

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ 2003ರ ಪ್ರಕರಣ 59ರ ಉಪ ಪ್ರಕರಣ (4)ರ ಅಡಿ ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು ಇವರ ನಡಾವಳಿಗಳು

**ವಿಷಯ:** ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ 2003– (1) ಅಮುಲ್ ಪನ್ನೀರ್ (ಕಾಟೇಜ್ ಚೀಸ್), (2) ಅಮುಲ್ ಬಾಸುಂದಿ, (3) ಅಮುಲ್ ಶ್ರೀಖಂಡ್; ಮತ್ತು (4) ಅಮುಲ್ ಅಮರ್‌ಖಂಡ್ ಮೇಲೆ ಅನ್ವಯವಾಗುವ ತೆರಿಗೆ ದರದ ಸ್ಪಷ್ಟೀಕರಣ ಕುರಿತು.

**ಉಲ್ಲೇಖ:** ಶ್ರೀ ರಾಜೇಶ್, ಎಕ್ಸಿಕ್ಯೂಟಿವ್ (ಅಕೌಂಟ್ಸ್), ಮೆ:ಗುಜರಾತ್ ಕೋ–ಆಪರೇಟಿವ್ ಮಿಲ್ಕ್ ಮಾರ್ಕೆಟಿಂಗ್ ಫೆಡರೇಶನ್ ಲಿಮಿಟೆಡ್, 5/2, 80 ಅಡಿ ರಸ್ತೆ, 8ನೇ ಬ್ಲಾಕ್, ಕೋರಮಂಗಲ, ಬೆಂಗಳೂರು–560095 ಇವರ ದಿನಾಂಕ:10.11.2009ರ ಅರ್ಜಿ.

ಅರ್ಜಿದಾರರಾದ ಶ್ರೀ ರಾಜೇಶ್, ಎಕ್ಸಿಕ್ಯೂಟಿವ್ (ಅಕೌಂಟ್ಸ್), ಮೆ:ಗುಜರಾತ್ ಕೋ–ಆಪರೇಟಿವ್ ಮಿಲ್ಕ್ ಮಾರ್ಕೆಟಿಂಗ್ ಫೆಡರೇಶನ್ ಲಿಮಿಟೆಡ್, 5/2, 80 ಅಡಿ ರಸ್ತೆ, 8ನೇ ಬ್ಲಾಕ್, ಕೋರಮಂಗಲ, ಬೆಂಗಳೂರು–560095, ಇವರು ಮೇಲ್ಕಂಡ ಅರ್ಜಿಯಲ್ಲಿ (1) ಅಮುಲ್ ಪನ್ನೀರ್ (ಕಾಟೇಜ್ ಚೀಸ್), (2) ಅಮುಲ್ ಬಾಸುಂದಿ, (3) ಅಮುಲ್ ಶ್ರೀಖಂಡ್; ಮತ್ತು (4) ಅಮುಲ್ ಅಮರ್‌ಖಂಡ್ ಮೇಲೆ ಅನ್ವಯವಾಗುವ ತೆರಿಗೆ ದರದ ಸ್ಪಷ್ಟೀಕರಣವನ್ನು ಕೋರಿರುತ್ತಾರೆ.

2. 2003ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮದ ಪ್ರಕರಣ 59ರ ಉಪ ಪ್ರಕರಣ (4)ರ ಮೇರೆಗೆ ವಾಣಿಜ್ಯ ತೆರಿಗೆ ಆಯುಕ್ತರು (ಕರ್ನಾಟಕ), ಬೆಂಗಳೂರು ಇವರ ತೆರಿಗೆಯ ನಿರ್ಧಾರಣೆ ಹಾಗೂ ರಾಜಸ್ವದ ಸಂಗ್ರಹಣೆ ಕಾರ್ಯದಲ್ಲಿ ಏಕರೂಪತೆಯನ್ನು ತರುವ ಉದ್ದೇಶಕ್ಕಾಗಿ, ಸದರಿ ಅಧಿನಿಯಮದಡಿಯಲ್ಲಿ ತೆರಿಗೆಗೆ ಗುರಿಯಾಗತಕ್ಕ ಸರಕುಗಳ ಸಂಬಂಧದಲ್ಲಿ ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡತಕ್ಕ ತೆರಿಗೆ ದರವನ್ನು ಸ್ಪಷ್ಟಪಡಿಸುವುದು ಅವಶ್ಯವೆಂದು ಅಥವಾ ಯುಕ್ತವೆಂದು ಭಾವಿಸಿದರೆ ಹಾಗೆ ಮಾಡಲು ಅಧಿಕಾರ ಹೊಂದಿದ್ದಾರೆ.

ಅರ್ಜಿದಾರರು ಕೋರಿರುವ ಸ್ಪಷ್ಟೀಕರಣವು ಮೇಲೆ ನಮೂದಿಸಿದ ಉಪಬಂಧದ ವ್ಯಾಪ್ತಿಗೊಳಪಡುವುದರಿಂದ ತೆರಿಗೆ ದರದ ಬಗ್ಗೆ ಸ್ಪಷ್ಟಪಡಿಸುವುದು ಸದರಿ ಉಪಬಂಧದ ಉದ್ದೇಶ ಸಾಧನೆಗಾಗಿ ಅವಶ್ಯವೆಂದು ಮನವರಿಕೆಯಾಗಿದೆ.

3. ಈ ಹಿನ್ನೆಲೆಯಲ್ಲಿ ತೆರಿಗೆ ದರವನ್ನು ಈ ಕೆಳಕಂಡಂತೆ ಸ್ಪಷ್ಟೀಕರಿಸಲಾಗಿದೆ.

**ಸ್ಪಷ್ಟೀಕರಣ ಆದೇಶ ಸಂಖ್ಯೆ: ಸಿಎಲ್ಆರ್/ಸಿಆರ್–148/09–10, ದಿನಾಂಕ:2ನೇ ಫೆಬ್ರವರಿ, 2010**

ಈ ಕೆಳಕಂಡ ಸರಕುಗಳಿಗೆ ಅನ್ವಯವಾಗುವ ತೆರಿಗೆ ದರವನ್ನು ಕೆಳಗಿನಂತೆ ಸ್ಪಷ್ಟೀಕರಿಸಲಾಗಿದೆ.

| ಕ್ರಮ ಸಂಖ್ಯೆ | ಸರಕುಗಳು | ತೆರಿಗೆ ದರ/ ಪ್ರಕರಣ |
|---|---|---|
| 1. | ಅಮುಲ್ ಪನ್ನೀರ್ (ಕಾಟೇಜ್ ಚೀಸ್) | 2003ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮದ 3ನೇ ಅನುಸೂಚಿಯ ಕ್ರಮ ಸಂಖ್ಯೆ: 86ರಂತೆ ಶೇಕಡಾ 4 |

| ಕ್ರಮ ಸಂಖ್ಯೆ | ಸರಕುಗಳು | ತೆರಿಗೆ ದರ/ ಪ್ರಕರಣ |
|---|---|---|
| 2. | ಅಮುಲ್ ಬಾಸುಂದಿ | ಅಧಿಸೂಚನೆ ಸಂಖ್ಯೆ:ಎಫ್‌ಡಿ 169 ಸಿಎಸ್‌ಎಲ್ 2005, ದಿನಾಂಕ:05.07.2005 ರಂತೆ ಶೇಕಡಾ 4 |
| 3. | ಅಮುಲ್ ಶ್ರೀಖಂಡ್ | ಅಧಿಸೂಚನೆ ಸಂಖ್ಯೆ:ಎಫ್‌ಡಿ 169 ಸಿಎಸ್‌ಎಲ್ 2005, ದಿನಾಂಕ:05.07.2005 ರಂತೆ ಶೇಕಡಾ 4 |
| 4. | ಅಮುಲ್ ಅಮರ್‌ಖಂಡ್ | ಅಧಿಸೂಚನೆ ಸಂಖ್ಯೆ:ಎಫ್‌ಡಿ 169 ಸಿಎಸ್‌ಎಲ್ 2005, ದಿನಾಂಕ:05.07.2005 ರಂತೆ ಶೇಕಡಾ 4 |

**ಪ್ರದೀಪ್ ಸಿಂಗ್ ಖರೋಲ**

ಪಿ.ಆರ್.292

ವಾಣಿಜ್ಯ ತೆರಿಗೆಗಳ ಆಯುಕ್ತರು, (ಕರ್ನಾಟಕ),

ಬೆಂಗಳೂರು.

**PROCEEDINGS OF THE ASSISTANT COMMISSIONER OF COMMERCIAL TAXES, LOCAL VAT OFFICE-075, BANGALORE**

**Dated:26th August, 2008**

**PRESENT:** C.R. MANJUNATH

Assistant Commissioner of Commercial Taxes (LVO-075)

**Sub:** Loss of 'C' Form in case of M/S. Kamalam Handlooms (P) Ltd., Bangalore.

**Read:** Letter Dated:27.01.2010 of M/s Kamalam Handlooms (P) Ltd., Bangalore.

**Preamble:**

M/s Kamalam Handlooms (P) Ltd., No.266, 4th Phase, Peenya Industrial Area, Bangalore-58 is a registered dealer borne on the files of this office bearing TIN-29360111364. The company in its letter cited at read above has intimated that 3 leaves of 'C' Forms bearing Nos. 2995417, 2995418 & 2995419 issued by the department, is lost in transit.

The company has produced the proof for having filed the complaint to police authorities for loss of above 'C' Form and executed Indemnity Bond in favour of the Government as laid down Rule 12(2) and 12(9) of CST Act, 1956.

Since the said 'C' Forms are stated to be lost in transit, the Form so lost is treated as Invalid. Hence, this order.

**Order No.ACCT/LVO-075/2009-10, Dated:1st February, 2010**

In view of the circumstances explained above the said 'C' Forms treated as invalid with immediate effect.

Assistant Commissioner of Commercial Taxes,

LVO-075, Peenya, Bangalore-58.

**OFFICE OF THE ASSISTANT COMMISSIONER OF COMMERCIAL TAXES, LVO-075, BANGALORE**

**Notified Authority Under the Rule 6(i) of the CST (Karnataka) Rules 1957**

**NOTIFICATION**

**No.ACCT/LVO-075/09-10, Dated:18th February, 2010**

By virtue of the provisions of rule 12(2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declaration in Form-C described below is declared to be obsolete and Invalid.

| Sl. No. | Number (including code No.) of declaration Forms Lost destroyed or stolen | Name & address of the dealer to whom declaration Forms is/ are issued by the department with date of C form issue | Registration certificate No. of the dealer under CST Act 1956 | The address of the dealer to whom the declaration is/are sent | Date of issue of Form/s by the dealer | Whether Lost/ Stolen/ destroyed | Remarks |
|---|---|---|---|---|---|---|---|
| 1. | C-Form No. 1) 2995417 2) 2995418 3) 2995419 | M/s Kamalam Handloom (P) Ltd., No.266, 4th Phase, PIE, Bangalore-58 | 29360111364 | M/s C.J. Chemicals (Pvt) Ltd., No.1878, 20th Main, 20th Cross, Vijayanagar, Bangalore-40 | 24.04.2006 | Lost | 1) 1166185/- 2) 851497/- 3) 973745/- |

Assistant Commissioner of Commercial Taxes,
PR-295 LVO-075, Peenya, Bangalore-58.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ಬೃಹತ್‌ಕಾಮಗಾರಿ ವಿಭಾಗ, ಕವಿಪ್ರನಿನಿ, ಕೋತಿತೋಪು ರಸ್ತೆ, ತುಮಕೂರು**

**ಪ್ರಕಟಣೆ**

**ಸಂಖ್ಯೆ: ಕಾನಿಇಂ/ಬೃಕಾವಿ/ತು/2010–11/11–15, ದಿನಾಂಕ:17ನೇ ಏಪ್ರಿಲ್, 2010**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು 2003ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮದ ಪ್ರಕರಣ 67ರ ಅನ್ವಯ ಈ ಕೆಳಗೆ ತಿಳಿಸಿರುವ ಯೋಜನೆಯೊಂದನ್ನು ರೂಪಿಸಿದೆ ಮತ್ತು ಸದರಿ ಯೋಜನೆಯನ್ನು ಹಾಗೂ ಸದರಿ ನಿಯಮದ ಪ್ರಕರಣ 67(2)(ಸಿ) ರ ಅನ್ವಯ ಈ ಮೂಲಕ ಯೋಜನೆಯನ್ನು ಲೈಸೆನ್ಸ್‌ದಾರರು ಮತ್ತು ಸಂಬಂಧಪಟ್ಟ ಇತರೆ ವ್ಯಕ್ತಿಗಳ ತಿಳುವಳಿಕೆಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಮುಂದಿನಂತಿರುತ್ತವೆ.

**ಯೋಜನೆಯ ಹೆಸರು:** ತುರುವೇಕೆರೆ ತಾಲ್ಲೂಕು, ತುಮಕೂರು ಜಿಲ್ಲೆ, ಅಮ್ಮಸಂದ್ರದಲ್ಲಿ ನಿರ್ಮಿಸಲಾಗುವ ಹಾಲಿ ಇರುವ 110/11 ಕೆ.ವಿ. ಅಮ್ಮಸಂದ್ರ ವಿದ್ಯುತ್ ಉಪಕೇಂದ್ರದಿಂದ ಪ್ರಸ್ತಾವಿತ ಮೆ॥ ಹೈಡೆಲ್ ಬರ್ಗ್ ಸೀಮೆಂಟ್ ಇಂಡಿಯಾ ನಿ ಇವರ 110/11 ಕೆವಿ ವಿದ್ಯುತ್ ಉಪಕೇಂದ್ರದ ವರೆಗೆ 110 ಕೆ.ವಿ. ಒತ್ತಡದ ವಿದ್ಯುತ್ ಮಾರ್ಗವನ್ನು ಸ್ವಯಂ ನಿರ್ಮಾಣದ ಕಾಮಗಾರಿಯಲ್ಲಿ ಕೈಗೊಳ್ಳಲಾಗುವುದು.

**ಹಾದು ಹೋಗುವ ಪ್ರದೇಶ:** ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕಿನ ಹಾಲಿ ಇರುವ 110/11 ಕೆ.ವಿ. ಅಮ್ಮಸಂದ್ರ ವಿದ್ಯುತ್ ಉಪಸ್ಥಾವರದಿಂದ ಪ್ರಸ್ತಾವಿತ ಮೆ॥ ಹೈಡೆಲ್ ಬರ್ಗ್ ಸೀಮೆಂಟ್ ಇಂಡಿಯಾ ನಿ ಇವರ 110 ಕೆವಿ ವಿದ್ಯುತ್ ಉಪಕೇಂದ್ರದ ವರೆಗೆ ಅಮ್ಮಸಂದ್ರ ಗ್ರಾಮದ ಸರಹದ್ದಿನಲ್ಲಿ 0.62 ಕಿ.ಮೀ. ಉದ್ದ ಹಾದು ಹೋಗುತ್ತದೆ.

**ಅಂದಾಜು ವೆಚ್ಚ:** ರೂ.105 ಲಕ್ಷಗಳು

ಕ.ವಿ.ಪ್ರ.ನಿ.ನಿ. ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ–111 ರ (ಕೇಂದ್ರ ಕಾಯ್ದೆ 1885ರ 13 ಅನ್ವಯ) ಅಧಿನಿಯಮದನ್ವಯ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ.

ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 60 ದಿನಗಳ ಒಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ಕೋತಿತೋಪು, ತುಮಕೂರು–02 ಇವರಿಗೆ ಕಳುಹಿಸುವುದು.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಬೃಹತ್‌ಕಾಮಗಾರಿ ವಿಭಾಗ, ಕವಿಪ್ರನಿನಿ,
ತುಮಕೂರು.

ಪಿಡಿ–65

**DISTRICT AND SESSIONS COURT, BAGALKOT**

**NOTIFICATION NO.1/2010**

**DATED:26TH APRIL, 2010**

As required under Section 4(1)(b) of the Right to information Act, 2005 (Central Act No.22 of 2005), the detailed information relating to the District and Sessions Court, Bagalkot is published as hereunder, for the information of general public.

| | | |
|---|---|---|
| 1. | The particulars of its organisation, functions and duties. | **Organisation:**<br>District and Sessions Court, Bagalkot.<br>**Functions and Duties:**<br>Administration of Justice. |
| 2. | The powers and duties of its Officers and employees. | As per Annexure-1 |
| 3. | The procedure followed in the decision making process, including channels of supervision and accountability. | The case workers process the proposals and send them to the Sheristedars. The Sheristedars scrutinise and send them to the Chief Administrative Officer. The Chief Administrative Officer in turn verifies them and submit them to the Hon'ble District and Sessions Judge who takes a decision. |
| 4. | The norms set by it for the discharge of its functions. | Taking timely decisions in accordance with rules. |
| 5. | The rules, regulations instructions, manuals and records held by it or under its control or used by its employees for discharging its functions. | As per Annexure-II |
| 6. | A statement of the categories of documents that are held by it or under its control | Files and Registers. |
| 7. | The particulars of any arrangement that exists for consultation with or representation by the members of the public in relation to the formulation of its policy or implementation thereof. | No such arrangement in this office. |
| 8. | A statement of the boards, councils, committees and other bodies consisting of two or more | No such boards, councils, committees or other bodies are constituted in this Office. |

| | | |
|---|---|---|
| | persons constituted as its part or for the purpose of its advice and as to whether meeting of those boards, council, committees and other bodies are open to the public or the minutes of such meetings are accessible for public. | |
| 9. | A Directory of its officers and employees. | The Directory of Officers and Employees is maintained. |
| 10. | The monthly remuneration received by each of its officers and employees, including the system of compensations provided in its regulations. | The monthly remuneration of each Officer and Officials change frequently due to grant of increments, D.A. etc., |
| 11. | The budget allocated to each of its agency, indicating the particulars of all plans, proposed expenditures and reports on disbursements made. | The budget will be allocated for Salary, T.A. and Office Expenses. |
| 12. | The manner of execution of Subsidy programmes, including the amounts allocated and the details allocated and the details of beneficiaries of such programmes. | Does not arise, since there are no subsidy programmes. |
| 13. | Particulars of recipients of concessions, permits or authorizations granted by it. | Does not arise. |
| 14. | Details in respect of the information available to or held by it, reduced an electronic form. | The data entries of the cases, pay particulars of the employees and issue of certified copies are processed through Computers whenever it is possible. |
| 15. | The particulars of facilities available to citizens for obtaining information including the working hours of library or reading room if maintained for public use. | Library is meant for the use of Hon'ble Judges only. |
| 16. | The names, designations and other particulars of the Public Information Officers. | Sri M.A. Telsang,<br>Chief Administrative Officer, State Public Information Officer, District and Sessions Court, Bagalkot.<br>Ph:(08354) 224227. |
| 17. | Such other information as may be prescribed. | Nil |

Chief Administrative Officer and
State Public Information Officer District
and Sessions Court, Bagalkot.

**ANNEXURE-I**

The Powers and duties of the Officers and employees of the District and Sessions Court, Bagalkot.

| | | |
|---|---|---|
| 1. | Chief Administrative Officer. | Upon the Orders and directions to deal with the Administrative matters. |
| 2. | Sheristedars | To be incharge of the Branch/Section and to attend scrutiny of files submitted by the case workers. |
| 3. | Judgement Writer/ Stenographer | To takedown dictation from the Presiding Officers, transcribe and type the Judgments and Orders. |
| 4. | First Division Assistant | To attend the files relating to matters and to maintain the registers. to work as case workers. |
| 5. | Second Division Assistant | To attend the files relating to matters and to maintain the registers. To work as case workers. |
| 6. | Typist and Typist Copyists | To attend typing work of the office. |
| 7. | Bailiff and Process Servers | To attend execution of warrants and service of process. |
| 8. | Driver | To attend the office vehicle. |
| 9. | Attender | To attend the Open Court work. |
| 10. | Peons | To attend maintaining the cleanliness of the office, delivery of tapals, movement of files, registers and to work as Watchman etc., |

Chief Administrative Officer and
State Public Information Officer District
and Sessions Court, Bagalkot.

**ANNEXURE-II**

The rules, regulations instructions, manuals and records held by/ or under its control or used by employees for discharging the functions in District and Sessions Court, Bagalkot.

1. The Karnataka Civil Rules of Practice, 1967.
2. The Karnataka Criminal Rules of Practice, 1968
3. The Karnataka Civil Service Rules, 1957.
4. The Karnataka Financial Code, 1958.
5. The Karnataka Sub-ordinate Courts (Ministerial and Other Posts) (Recruitment) Rules, 1982.
6. The KCS (CCA) Rules, 1957.
7. The KCS (Conduct) Rules, 1966.
8. The KCS (General Recruitment) Rules, 1977.

9. The KCS (Probation) Rules, 1977.

10. The KCS (Seniority) Rules, 1957.

Chief Administrative Officer and
State Public Information Officer District
and Sessions Court, Bagalkot.

**ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ**

**ಅಧಿಸೂಚನೆ ಸಂಖ್ಯೆ:1/2010, ದಿನಾಂಕ:26ನೇ ಏಪ್ರಿಲ್, 2010**

ಮಾಹಿತಿ ಹಕ್ಕು ಅಧಿನಿಯಮ 2005 (2005ರ ಕೇಂದ್ರ ಅಧಿನಿಯಮ ಸಂಖ್ಯೆ: 22) ರ ಕಲಂ 4(1)(ಬಿ) ಅಡಿಯಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ ಬಗೆಗೆ ಸಂಬಂಧಿಸಿದ ಮಾಹಿತಿಯನ್ನು ಈ ಕೆಳಗಿನಂತೆ ಸಾರ್ವಜನಿಕ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| | | |
|---|---|---|
| 1. | ಪ್ರಾಧಿಕಾರದ ರಚನೆ, ಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು | **ಸಂಸ್ಥೆ:**<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ,<br>**ಕಾರ್ಯ ಮತ್ತು ಕರ್ತವ್ಯಗಳು:**<br>ನ್ಯಾಯದಾನ ವ್ಯವಸ್ಥೆ. |
| 2. | ಪ್ರಾಧಿಕಾರದ ಅಧಿಕಾರಿಗಳ ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳು | ಅನುಬಂಧ–1 ರಲ್ಲಿಯಂತೆ |
| 3. | ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯ ಮಾರ್ಗಗಳು ಸೇರಿದಂತೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನಗಳು | ವಿಷಯ ನಿರ್ವಾಹಕರು ವಿಷಯ ಮಂಡನೆ ಮಾಡಿ ಶಿರಸ್ತೇದಾರರಿಗೆ ಕಳುಹಿಸುವುದು ಶಿರಸ್ತೆದಾರರು ಪರಿಶೀಲಿಸಿ ಮುಖ್ಯ ಆಡಳಿತಾಧಿಕಾರಿಗಳಿಗೆ ಕಳುಹಿಸುವುದು. ಮುಖ್ಯ ಆಡಳಿತಾಧಿಕಾರಿಗಳು ಪರಿಶೀಲಿಸಿ ಗೌರವಾನ್ವಿತ ಜಿಲ್ಲಾ ನ್ಯಾಯಾಧೀಶರಿಗೆ ಸಲ್ಲಿಸುವುದು. ಜಿಲ್ಲಾ ನ್ಯಾಯಾಧೀಶರು ಸೂಕ್ತ ನಿರ್ಣಯ ಕೈಗೊಳ್ಳುವುದು. |
| 4. | ಪ್ರಾಧಿಕಾರದ ಕಾರ್ಯಗಳ ನಿರ್ವಹಣೆಗೆ ರೂಪಿಸಿರುವ ಸೂತ್ರಗಳು. | ನಿಯಮಗಳ ಅನುಸಾರ ತ್ವರಿತವಾಗಿ ನಿರ್ಣಯ ಕೈಗೊಳ್ಳುವುದು. |
| 5. | ಪ್ರಾಧಿಕಾರದ ಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ಹೊಂದಿರುವ ಅಥವಾ ನಿಯಂತ್ರಣದಲ್ಲಿರುವ ಅಥವಾ ಉದ್ಯೋಗಿಗಳು ಬಳಸುವ ನಿಯಮಗಳು, ವಿನಿಯಮಗಳು, ಅನುಸೂಚಿಗಳು, ಕೈಪಿಡಿಗಳು ಮತ್ತು ದಾಖಲೆಗಳು. | ಅನುಬಂಧ–2 ರಲ್ಲಿಯಂತೆ |
| 6. | ಪ್ರಾಧಿಕಾರವು ಹೊಂದಿರುವ ಅಥವಾ ಅದರ ನಿಯಂತ್ರಣದಲ್ಲಿರುವ ದಸ್ತಾವೇಜುಗಳ ಪ್ರವರ್ಗಗಳ ವಿವರಪಟ್ಟಿ. | ಕಡತಗಳು ಮತ್ತು ರಜಿಸ್ಟರ್‌ಗಳು |
| 7. | ಪ್ರಾಧಿಕಾರದ ಕಾರ್ಯನೀತಿಯ ರಚನೆ ಅಥವಾ ಅದರ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಅಥವಾ ಅವರ ಪ್ರಾತಿನಿಧ್ಯವಿರುವಂತೆ ಮಾಡಲು ಇರುವಂಥ ಯಾವುದೇ ವ್ಯವಸ್ಥೆಯ ವಿವರಗಳು. | ಈ ಕಾರ್ಯಾಲಯದಲ್ಲಿ ಅಂತಹ ವ್ಯವಸ್ಥೆ ಇರುವುದಿಲ್ಲ. |

| | | |
|---|---|---|
| 8. | ಮಂಡಳಿಗಳು, ಪರಿಷತ್ತುಗಳು, ಸಮಿತಿಗಳು ಅಥವಾ ಇತರ ನಿಕಾಯಗಳು ಮತ್ತು ಅದರ ಭಾಗವಾಗಿ ಅಥವಾ ಅದರ ಸಲಹೆಯ ಉದ್ದೇಶಕ್ಕಾಗಿ ರಚಿತವಾದ ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳನ್ನೊಳಗೊಂಡ ಮಂಡಳಿಗಳ, ಪರಿಷತ್ತುಗಳ, ಸಮಿತಿಗಳ ಮತ್ತು ಇತರ ನಿಕಾಯಗಳ ಸಭೆಗಳು ಸಾರ್ವಜನಿಕರಿಗೆ ಮುಕ್ತವಾಗಿರುತ್ತವೆಯೇ ಅಥವಾ ಅಂತಹ ಸಭೆಗಳ ನಡಾವಳಿಗಳು ಸಾರ್ವಜನಿಕರಿಗೆ ದೊರೆಯುತ್ತವೆಯೇ ಎಂಬುದರ ವಿವರಪಟ್ಟಿ. | ಮಂಡಳಿ, ಪರಿಷತ್ತು ಕಮಿಟಿ ಅಥವಾ ಇತರ ಸಂಸ್ಥೆಗಳನ್ನು ಈ ಕಾರ್ಯಾಲಯದಲ್ಲಿ ರಚಿಸಿರುವುದಿಲ್ಲ. |
| 9. | ಪ್ರಾಧಿಕಾರದ ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆ. | ಅಧಿಕಾರಿಗಳ ಮತ್ತು ಸಿಬ್ಬಂದಿಯವರ ನಿರ್ದೇಶಿಕೆ ನಿರ್ವಹಿಸಲಾಗಿದೆ. |
| 10. | ಪ್ರಾಧಿಕಾರದ ವಿನಿಯಮಗಳಲ್ಲಿ ಉಪಬಂಧಿಸಿರುವಂತೆ ಪರಿಹಾರದ ವ್ಯವಸ್ಥೆಯೂ ಸೇರಿದಂತೆ ಅದರ ಪ್ರತಿಯೊಬ್ಬ ಅಧಿಕಾರಿ ಮತ್ತು ನೌಕರರು ಪಡೆಯುವ ತಿಂಗಳ ಸಂಬಳ. | ಅಧಿಕಾರಿಗಳ ಮತ್ತು ಸಿಬ್ಬಂದಿಯವರ ಪ್ರತಿ ತಿಂಗಳ ವೇತನ, ವೇತನ ಬಡ್ತಿ ಮತ್ತು ತುಟ್ಟಿ ಭತ್ಯೆಯ ಬದಲಾವಣೆಯಿಂದಾಗಿ ಬದಲಾಗುತ್ತಿರುತ್ತದೆ. |
| 11. | ಎಲ್ಲಾ ಯೋಜನೆಗಳ ವಿವರಗಳನ್ನು ಸೂಚಿಸುವ ಪ್ರಸ್ತಾವಿತ ವೆಚ್ಚಗಳನ್ನು ಮತ್ತು ಮಾಡಲಾದ ಬಟವಾಡೆಗಳ ವರದಿಯನ್ನು ಸೂಚಿಸಿ, ಅದರ ಪ್ರತಿಯೊಂದು ಏಜೆನ್ಸಿಗೆ ಹಂಚಿಕೆ ಮಾಡಲಾದ ಆಯವ್ಯಯ. | ವೇತನ, ಪ್ರವಾಸ ಭತ್ಯೆ ಮತ್ತು ಕಾರ್ಯಾಲಯದ ವೆಚ್ಚಕ್ಕಾಗಿ ಬಜೆಟ್ಟನ್ನು ಮಂಜೂರು ಮಾಡಲಾಗುವುದು. |
| 12. | ಹಂಚಿಕೆ ಮಾಡಲಾದ ಮೊಬಲಗನ್ನೊಳಗೊಂಡು, ಸಹಾಯಧನ ಕಾರ್ಯಕ್ರಮಗಳ ಜಾರಿಯ ವಿಧಾನವನ್ನು ಮತ್ತು ಅಂತಹ ಕಾರ್ಯಕ್ರಮಗಳ ಫಲಾನುಭವಿಗಳ ವಿವರಗಳು. | ಸಹಾಯಧನ ಕಾರ್ಯಕ್ರಮಗಳು ಇರಲಾರದ ಕಾರಣ ಅನ್ವಯಿಸುವುದಿಲ್ಲ. |
| 13. | ಪ್ರಾಧಿಕಾರವು ನೀಡಿರುವ ರಿಯಾಯಿತಿಗಳನ್ನು, ಅನುಮತಿ ಪತ್ರಗಳನ್ನು ಅಥವಾ ಅಧಿಕಾರ ಪತ್ರಗಳನ್ನು ಪಡೆಯುವವರ ವಿವರಗಳು. | ಅನ್ವಯಿಸುವುದಿಲ್ಲ. |
| 14. | ಪ್ರಾಧಿಕಾರದ ಬಳಿ ಲಭ್ಯವಿರುವ ಅಥವಾ ಅದು ಹೊಂದಿರುವ ವಿದ್ಯುನ್ಮಾನ ರೂಪಕ್ಕೆ ಪರಿವರ್ತಿಸಿರುವ, ಮಾಹಿತಿಗೆ ಸಂಬಂಧಿಸಿದ ವಿವರಗಳು. | ಪ್ರಕರಣಗಳ ಬಗ್ಗೆ, ಸಿಬ್ಬಂದಿಯವರ ವೇತನ ವಿವರಗಳು ಮತ್ತು ನಕಲು ಪೂರೈಸಲು ವಿದ್ಯುನ್ಮಾನ ಯಂತ್ರಗಳನ್ನು ಲಭ್ಯವಿದ್ದಲ್ಲಿ ಬಳಸಲಾಗುವುದು. |
| 15. | ಸಾರ್ವಜನಿಕ ಉಪಯೋಗಕ್ಕಾಗಿ ಗ್ರಂಥಾಲಯವನ್ನು ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದಲ್ಲಿ ಅದರ ಕರ್ತವ್ಯ ವೇಳಾ ಮಾಹಿತಿ ಪಡೆಯಲು ಸಾರ್ವಜನಿಕರಿಗೆ ಲಭ್ಯವಿರುವ ಸೌಲಭ್ಯಗಳ ವಿವರ | ಗ್ರಂಥಾಲಯವು ಗೌರವಾನ್ವಿತ ನ್ಯಾಯಾಧೀಶರುಗಳ ಉಪಯೋಗಕ್ಕೆ ಮಾತ್ರ ಇರುತ್ತದೆ. |
| 16. | ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರುಗಳು, ಪದನಾಮಗಳು ಮತ್ತು ಇತರ ವಿವರಗಳು. | ಶ್ರೀ ಎಮ್.ಎ. ತೆಲಸಂಗ,<br>ಮುಖ್ಯ ಆಡಳಿತಾಧಿಕಾರಿಗಳು, ಸಾರ್ವಜನಿಕ ಮಾಹಿತಿ ಅಧಿಕಾರಿ, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ, ದೂರವಾಣಿ: (08354) 224227. |

| | | |
|---|---|---|
| 17. | ನಿಯಮಿಸಬಹುದಾದಂತಹ ಇತರ ಮಾಹಿತಿಗಳು ಮತ್ತು ಆ ತರುವಾಯ ಪ್ರತಿವರ್ಷ ಪ್ರಕಟಿಸಲಾದ ಮಾಹಿತಿ. | ಇಲ್ಲ |

ಮುಖ್ಯ ಆಡಳಿತಾಧಿಕಾರಿಗಳು ಮತ್ತು ಸಾರ್ವಜನಿಕ
ಮಾಹಿತಿ ಅಧಿಕಾರಿಗಳು ಜಿಲ್ಲಾ ಮತ್ತು ಸತ್ರ
ನ್ಯಾಯಾಲಯ, ಬಾಗಲಕೋಟೆ.

**ಅನುಬಂಧ–1**

ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ ಇಲ್ಲಿನ ಅಧಿಕಾರಿಗಳ ಹಾಗೂ ನೌಕರರ ಕರ್ತವ್ಯಗಳು ಮತ್ತು ಅಧಿಕಾರಗಳು.

| | | |
|---|---|---|
| 1. | ಮುಖ್ಯ ಆಡಳಿತಾಧಿಕಾರಿಗಳು | ಗೌರವಾನ್ವಿತ ಉಚ್ಛ ನ್ಯಾಯಾಲಯ ಮತ್ತು ಜಿಲ್ಲಾ ನ್ಯಾಯಾಧೀಶರ ಆದೇಶ ಮತ್ತು ನಿರ್ದೇಶನದ ಮೇರೆಗೆ ಆಡಳಿತಾತ್ಮಕ ವಿಷಯಗಳ ಬಗ್ಗೆ ಕಾರ್ಯ ನಿರ್ವಹಿಸುವುದು. |
| 2. | ಶಿರಸ್ತೇದಾರರು | ವಿಭಾಗ ಮತ್ತು ಶಾಖೆಯ ಪ್ರಭಾರಧಾರಕರಾಗಿದ್ದು, ವಿಷಯ ನಿರ್ವಾಹಕರು ಮಂಡಿಸಿದ ಕಡತಗಳನ್ನು ಪರಿಶೀಲಿಸುವುದು. |
| 3. | ತೀರ್ಪು ಬರಹಗಾರರು ಮತ್ತು ಶೀಘ್ರಲಿಪಿಗಾರರು | ಗೌರವಾನ್ವಿತ ನ್ಯಾಯಾಧೀಶರು ಉಕ್ತಲೇಖನ ಕೊಟ್ಟ ತೀರ್ಪು: ಆದೇಶಗಳನ್ನು ಲಿಪ್ಯಂತರ ಮಾಡಿ ಬೆರಳಚ್ಚು ಮಾಡುವುದು. |
| 4. | ಪ್ರಥಮ ದರ್ಜೆ ಸಹಾಯಕರು | ವಹಿಸಿಕೊಟ್ಟ ವಿಭಾಗದ ವಿಷಯ ನಿರ್ವಹಣೆ ಮಾಡುವುದು ಹಾಗೂ ಸಂಬಂಧಿಸಿದ ವಹಿಗಳನ್ನು ನಿರ್ವಹಿಸುವುದು ಹಾಗೂ ಸಹಾಯಕನಾಗಿ ಕಾರ್ಯನಿರ್ವಹಿಸುವುದು. |
| 5. | ದ್ವಿತೀಯ ದರ್ಜೆ ಸಹಾಯಕರು | ವಹಿಸಿಕೊಟ್ಟ ವಿಭಾಗದ ವಿಷಯ ನಿರ್ವಹಣೆ ಮಾಡುವುದು ಹಾಗೂ ಸಂಬಂಧಿಸಿದ ವಹಿಗಳನ್ನು ನಿರ್ವಹಿಸುವುದು ಹಾಗೂ ಸಹಾಯಕನಾಗಿ ಕಾರ್ಯನಿರ್ವಹಿಸುವುದು. |
| 6. | ಬೆರಳಚ್ಚುಗಾರರು ಮತ್ತು ಬೆರಳಚ್ಚು ನಕಲುಗಾರರು | ಕಾರ್ಯಾಲಯದಲ್ಲಿ ಬೆರಳಚ್ಚು ಮಾಡುವುದು |
| 7. | ಬೇಲಿಫರು ಮತ್ತು ಪ್ರೊಸೆಸ್ ಜಾರಿಕಾರರು | ವಾರಂಟ್‌ಗಳನ್ನು ಅಮಲ್ಜಾರಿ ಮಾಡುವುದು ಹಾಗೂ ಪ್ರೊಸೆಸ್‌ಗಳನ್ನು ಜಾರಿಗೊಳಿಸುವುದು. |
| 8. | ವಾಹನ ಚಾಲಕರು | ನ್ಯಾಯಾಲಯದ ವಾಹನ ನಿರ್ವಹಣೆ |
| 9. | ಅಟೆಂಡರ್ | ನ್ಯಾಯಾಲಯದ ಕಾರ್ಯಕಲಾಪಗಳ ಸಮಯದಲ್ಲಿ ಸಹಾಯಕನಾಗಿ ಕಾರ್ಯನಿರ್ವಹಿಸುವುದು. |
| 10. | ಜವಾನರು | ನ್ಯಾಯಾಲಯವನ್ನು ಸ್ವಚ್ಚವಾಗಿಡುವುದು. ಪತ್ರಗಳನ್ನು ರವಾನಿಸುವುದು ಮತ್ತು ಕಡತಗಳನ್ನು ಒಂದು ವಿಭಾಗದಿಂದ ಇನ್ನೊಂದು ವಿಭಾಗಕ್ಕೆ ನೀಡುವುದು. ಕಾವಲುಗಾರರಾಗಿ ಕಾರ್ಯ ನಿರ್ವಹಿಸುವುದು ಇತ್ಯಾದಿ. |

ಮುಖ್ಯ ಆಡಳಿತಾಧಿಕಾರಿಗಳು ಮತ್ತು ಸಾರ್ವಜನಿಕ
ಮಾಹಿತಿ ಅಧಿಕಾರಿಗಳು ಜಿಲ್ಲಾ ಮತ್ತು ಸತ್ರ
ನ್ಯಾಯಾಲಯ, ಬಾಗಲಕೋಟೆ.

**ಅನುಬಂಧ–2**

ತಮ್ಮ ನಿಯಂತ್ರಣದಲ್ಲಿ ಹೊಂದಿರುವ ಅಥವಾ ತಮ್ಮ ಕರ್ತವ್ಯ ನಿರ್ವಹಿಸುವ ಸಂದರ್ಭದಲ್ಲಿ ನೌಕರರು ಬಳಸುವ ನಿಯಮಗಳು, ನಿಯಂತ್ರಣಗಳು, ನಿರ್ದೇಶನಗಳು, ಕೈಪಿಡಿಗಳು ಮತ್ತು ದಾಖಲೆಗಳು.

1) ಕರ್ನಾಟಕ ದಿವಾಣಿ: ವ್ಯವಹಾರಿಕ ನಿಯಮಗಳು, 1967.

2) ಕರ್ನಾಟಕ ಫೌಜುದಾರಿಕೆ ವ್ಯವಹಾರಿಕೆ ನಿಯಮಗಳು, 1908.

3) ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1957.

4) ಕರ್ನಾಟಕ ಆರ್ಥಿಕ ಸಂಹಿತೆ, 1958.

5) ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರ ಹುದ್ದೆಗಳು) (ನೇಮಕಾತಿ) ನಿಯಮಗಳು, 1982.

6) ಕರ್ನಾಟಕ ನಾಗರೀಕರ ಸೇವೆ (ಸಿಸಿಎ) ನಿಯಮಗಳು, 1957.

7) ಕರ್ನಾಟಕ ನಾಗರೀಕರ ಸೇವೆ (ನಡತೆ) ನಿಯಮಗಳು, 1966.

8) ಕರ್ನಾಟಕ ನಾಗರೀಕರ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳು, 1977.

9) ಕರ್ನಾಟಕ ನಾಗರೀಕರ ಸೇವೆ (ಪರೀಕ್ಷಾರ್ಥ ಸೇವೆ) ನಿಯಮಗಳು, 1977.

10) ಕರ್ನಾಟಕ ನಾಗರೀಕರ ಸೇವೆ (ಜೇಷ್ಠತಾ) ನಿಯಮಗಳು, 1957.

ಮುಖ್ಯ ಆಡಳಿತಾಧಿಕಾರಿಗಳು ಮತ್ತು ಸಾರ್ವಜನಿಕ
ಮಾಹಿತಿ ಅಧಿಕಾರಿಗಳು ಜಿಲ್ಲಾ ಮತ್ತು ಸತ್ರ
ನ್ಯಾಯಾಲಯ, ಬಾಗಲಕೋಟೆ.

ಪಿಆರ್–686

**ಕರ್ನಾಟಕ ವಿಧಾನ ಪರಿಷತ್ತು**

**ವಿಧಾನ ಪರಿಷತ್ತಿನ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ:5079, ವಿಧಾನಸೌಧ, ಬೆಂಗಳೂರು–560001**

**ಸಂಖ್ಯೆ:ಕವಿಪ/ಶಾರಶಾ/138/ಇತರೆ/2008–10, ಬೆಂಗಳೂರು, ದಿನಾಂಕ:30ನೇ ಮಾರ್ಚ್, 2010**

**ವಿಷಯ:** ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಬಿ. ರಾಮಕೃಷ್ಣ ಇವರ ವಿಳಾಸ ಬದಲಾವಣೆಯ ಬಗ್ಗೆ.

ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಬಿ. ರಾಮಕೃಷ್ಣರವರ ಹೆಸರಿಗೆ ಕಳುಹಿಸುವ ಎಲ್ಲಾ ಪತ್ರ ಹಾಗೂ ಮಾಹಿತಿಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಿರುವ ಹಿನ್ನಲೆಯಲ್ಲಿ, ವಿಳಾಸ ಬದಲಾವಣೆ ಬಗ್ಗೆ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಎಲ್ಲಾ ಇಲಾಖೆಗಳ ಮಾಹಿತಿಗಾಗಿ ರವಾನಿಸಲು ಕ್ರಮ ಕೈಗೊಳ್ಳಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

ಶ್ರೀ ಬಿ. ರಾಮಕೃಷ್ಣ,
ವಿಧಾನ ಪರಿಷತ್ತಿನ ಸದಸ್ಯರು,
"ನಾಗಶಿವ", ನಂ.ಕೆ.ಎಲ್.870, 23ನೇ ಅಡ್ಡರಸ್ತೆ, ಎ.ಪಿ.ಎಂ.ಸಿ. ರಸ್ತೆ,
ವಿಶ್ವೇಶ್ವರನಗರ, ಮಂಡ್ಯ ಸಿಟಿ. ದೂರವಾಣಿ ಸಂಖ್ಯೆ:08232–227054.

**ಎನ್. ಬಾಲಗುರು**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು,
ದೂರವಾಣಿ ಸಂಖ್ಯೆ:22341308.

ಪಿಆರ್–723

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು–01**

**ಅಧಿಸೂಚನೆ**

**ಸಂಖ್ಯೆ: ಕೃಮಾಇ/129/ ನಿಯವಿ/2010, ದಿನಾಂಕ:22ನೇ ಏಪ್ರಿಲ್, 2010**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಪ್ರಕರಣ 145ರ ಉಪಪ್ರಕರಣ (1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊರಡಿಸಲಾಗಿರುವ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 91 ಎಂಆರ್ಇ 93, ದಿನಾಂಕ:06.07.1994ರ ಮೂಲಕ ಕರ್ನಾಟಕ ಸರ್ಕಾರವು ಕೊಳ್ಳೇಗಾಲ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರವನ್ನು ವಿಭಜಿಸಿ, ಕೊಳ್ಳೇಗಾಲ ತಾಲ್ಲೂಕಿಗೆ ಕೊಳ್ಳೇಗಾಲ ಮಾರುಕಟ್ಟೆ ಕ್ಷೇತ್ರವೆಂದು

ಮತ್ತು ಟಿ.ನರಸೀಪುರ ತಾಲ್ಲೂಕಿಗೆ ಟಿ. ನರಸೀಪುರ ಮಾರುಕಟ್ಟೆ ಕ್ಷೇತ್ರವೆಂದು ಎರಡು ಪ್ರತ್ಯೇಕ ಮಾರುಕಟ್ಟೆ ಕ್ಷೇತ್ರಗಳನ್ನು ಘೋಷಿಸಿ, ಈ ಎರಡು ಮಾರುಕಟ್ಟೆ ಕ್ಷೇತ್ರಗಳಿಗೆ ಮಾರುಕಟ್ಟೆ ಸಮಿತಿಗಳನ್ನು ರಚಿಸಿದೆ.

ಮತ್ತು ಆ ಕಾರಣ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ (1966ರ ಕರ್ನಾಟಕ ಅಧಿನಿಯಮ 27) ಪ್ರಕರಣ 145ರ ಉಪಪ್ರಕರಣ 2ಎ ಯನ್ನು ಉಲ್ಲೇಖಿಸಿ ಪ್ರಕರಣ 6ರ ಉಪಪ್ರಕರಣ 2ರ ಮೇರೆಗೆ ಟಿ.ನರಸೀಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರವಾದ ಟಿ.ನರಸೀಪುರ ಪಟ್ಟಣ ಪರಿಮಿತಿಯೊಳಗಿನ ಪ್ರದೇಶವನ್ನು ಮಾರುಕಟ್ಟೆ ಎಂದು ಮತ್ತು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳವನ್ನು ಮಾರುಕಟ್ಟೆ ಪ್ರಾಂಗಣ ಎಂದು ಅಧಿಸೂಚನೆ ಸಂಖ್ಯೆ: ಕೃಮಾಇ/11/ನಿಯವಿ/93/(11), ದಿನಾಂಕ:06.02.1994ರಲ್ಲಿ ಕೃಷಿ ಮಾರಾಟ ನಿರ್ದೇಶಕರು ಘೋಷಿಸಿರುತ್ತಾರೆ.

ಕರ್ನಾಟಕ ಸರ್ಕಾರವು ರಾಜ್ಯದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ಈ ಕೆಳಗೆ ನಮೂದಿಸಿರುವಂತೆ ಅಧಿಸೂಚಿಸಲ್ಪಟ್ಟಿರುವ 112 ಕೃಷಿ ಉತ್ಪನ್ನಗಳನ್ನು ಮಾರಾಟ ನಿಯಂತ್ರಣಕ್ಕೊಳಪಡಿಸಿದೆ.

ಟಿ.ನರಸೀಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯು ಟಿ.ನರಸೀಪುರ ತಾಲ್ಲೂಕು ಕಸಬಾ ಹೋಬಳಿ, ಭೈರಾಪುರ ಗ್ರಾಮಕ್ಕೆ ಸೇರಿದ ಸರ್ವೆ ನಂ.68/2ಬಿ, 68/3ಎ, 68/3ಬಿ, 69/2ಬಿ, 69/3, 73/3ಬಿ, 74/1, 74/2 ರಲ್ಲಿ ಒಟ್ಟು 10 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡು ಮೂಲಭೂತ ಸೌಕರ್ಯಗಳನ್ನು ಒದಗಿಸಿ ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸಿದ್ದು ಪ್ರಸ್ತುತ ನಡೆಯುತ್ತಿರುವ ವ್ಯಾಪಾರ ವಹಿವಾಟಿನ ಪ್ರದೇಶವನ್ನು ಅಪವರ್ಜಿಸಿ ಅಭಿವೃದ್ಧಿಪಡಿಸಿರುವ ಪ್ರದೇಶಕ್ಕೆ ಸ್ಥಳಾಂತರಿಸಲು ಉದ್ದೇಶಿಸಿ ಟಿ.ನರಸೀಪುರ ಪಟ್ಟಣ ಪರಿಮಿತಿಯೊಳಗಿನ ಪ್ರದೇಶವನ್ನು **ಮಾರುಕಟ್ಟೆ** ಎಂದು ಹಾಗೂ ಈ ಕೆಳಗಿನ ಅನುಸೂಚಿಯಲ್ಲಿ ನಿಗದಿಪಡಿಸಿರುವ ಸ್ಥಳವನ್ನು **ಮಾರುಕಟ್ಟೆ ಪ್ರಾಂಗಣ** ಎಂದು ಕಲಂ 6(3)ರ ಮೇರೆಗೆ ಘೋಷಿಸಲು ಈ ಮೂಲಕ ಉದ್ದೇಶವನ್ನು ಪ್ರಕಟಿಸಿದ್ದೇನೆ.

**ಕೃಷಿ ಉತ್ಪನ್ನಗಳು**

(1) ಜಾನುವಾರುಗಳು, (2) ಮೇಕೆಗಳು, (3) ಕುರಿಗಳು, (4) ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), (5) ಎಲ್ಲಾ ಹೂ.ಗಳು, (6) ಸಜ್ಜೆ, (7) ಜವೆ ಗೋಧಿ, (8) ಜೋಳ, (9) ಕಂಬು, (10) ಮೆಕ್ಕೆಜೋಳ, (11) ನವಣೆ, (12) ಭತ್ತ, (13) ರಾಗಿ, (14) ಅಕ್ಕಿ, (15) ಸಾಮೆ (ಸಾವೆ), (16) ಗೋಧಿ, (17) ಅಂಟುವಾಳ, (18) ಬೊಂಬು, (19) ಬೆತ್ತ, (20) ಹಿಪ್ಪೆಬೀಜ, (21) ಹೊಂಗೇಬೀಜ, (22) ಬೇವಿನಬೀಜ, (23) ಸೀಗೇಕಾಯಿ, (24) ಹುಣಸೇಹಣ್ಣು, (25) ಹುಣಸೇಬೀಜ, (26) ಸೇಬು, (27) ಬಾಳೆಹಣ್ಣು, (28) ಬೋರೆಹಣ್ಣು, (29) ಹುಳಿಹಣ್ಣುಗಳು, (30) ಚಕ್ಕೋತನಹಣ್ಣು, (31) ಪೇರಲೆಹಣ್ಣು (ಸೀಬೆಹಣ್ಣು), (32) ದ್ರಾಕ್ಷಿ, (33) ಹಲಸಿನಹಣ್ಣು, (34) ಜಂಬುನೇರಳೆ ಹಣ್ಣು, (35) ನಿಂಬೆಹಣ್ಣು, (36) ಕರಬೂಜ, (37) ಮಾವಿನಹಣ್ಣು, (38) ಮೂಸಂಬಿ, (39) ಮರಸೇಬು, (40) ಪೈನಾಪಲ್ (ಅನಾನಸ್), (41) ಪಪ್ಪಾಯಿಹಣ್ಣು (ಪರಂಗಿಹಣ್ಣು), (42) ದಾಳಿಂಬೆಹಣ್ಣು, (43) ಸಪೋಟಾ, (44) ಸಿದ್ದೋಟ, (45) ಕಿತ್ತಾಳೆ, (46) ಕಲ್ಲಂಗಡಿ, (47) ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ), (48) ಹರಳುಬೀಜ, (49) ಹತ್ತಿಬೀಜ, (50) ಅಗಸೆಬೀಜ, (51) ಸಾಸುವೆ, (52) ಹುಚ್ಚೆಳ್ಳು, (53) ಕುಸುಬೆ, (54) ಎಳ್ಳು, (55) ಸೂರ್ಯಕಾಂತಿಬೀಜ, (56) ಸೋಯಾಬಿನ್, (57) ಅಡಿಕೆ, (58) ಗೋಡಂಬಿಬೀಜ, (59) ಒಣಮೆಣಸಿನಕಾಯಿ, (60) ತೆಂಗಿನಕಾಯಿ, (61) ಕೊಬ್ಬರಿ, (62) ಕೊತ್ತಂಬರಿಬೀಜ (ಧನಿಯಾ), (63) ಬೆಳ್ಳುಳ್ಳಿ, (64) ಶುಂಠಿ, (65) ಮೆಂತ್ಯ, (66) ಕಾಳುಮೆಣಸು, (67) ಅರಿಶಿನ, (68) ಅಲಸಂದೆ (ಇಡೀ ಮತ್ತು ಒಡೆದ), (69) ಅವರೆ (ಇಡೀ ಮತ್ತು ಒಡೆದ), (70) ಕಡಲೆ (ಇಡೀ ಮತ್ತು ಒಡೆದ), (71) ಉದ್ದು (ಇಡೀ ಮತ್ತು ಒಡೆದ), (72) ಬುಲ್ಲರ್ (ಇಡೀ ಮತ್ತು ಒಡೆದ), (73) ಹೆಸರು (ಇಡೀ ಮತ್ತು ಒಡೆದ), (74) ಹುರುಳಿ, (75) ಲಾಕ್ (ಇಡೀ ಮತ್ತು ಒಡೆದ), (76) ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), (77) ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), (78) ಬಟಾಣಿ, (79) ತೊಗರಿ (ಇಡೀ ಮತ್ತು ಒಡೆದ), (80) ಮೋತ್ (ಇಡೀ ಮತ್ತು ಒಡೆದ), (81) ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ) (ಗರ್ಕಿನ್ ಹೊರತುಪಡಿಸಿ), (82) ಕಾಯಿಗಳು, (83) ಹಸಿರುಮೆಣಸಿನಕಾಯಿ, (84) ಈರುಳ್ಳಿ, (85) ಆಲೂಗಡ್ಡೆ, (86) ಸುವರ್ಣಗೆಡ್ಡೆ, (87) ಸಿಹಿಗೆಣಸು (ಗೆಣಸು), (88) ಟೊಮ್ಯಾಟೋ, (89) ಬೀಟೆ (ರೋಸ್‌ವುಡ್), (90) ಬಿಲ್ವಾಲ, (91) ಗಂಜಾನ್, (92), ಹಡಗ, (93) ಹಳದಿ, (94) ಹನಿಮತ್ತಲ್, (95) ಹೊನ್ನೆ, (96) ಐಯಾನಿ, (97) ಹಲಸಿನಮರ, (98) ಜಂಬೆ, (99) ಕಲನ್, (100) ಕಿಂಡಲ್, (101) ಮಾವಿನಮರ, (102) ಮತ್ತಿ, (103) ನಂದಿ, (104) ರಾಂಪತ್ರೆ, (105) ತೇಗ (ಸಾಗುವಾನಿ),

(106) ಬಿಳಿ ದೇವದಾರು (ಕೇದರ), (107) ಸಿಲ್ವರ್ ಓಕ್, (108) ನೀಲಗಿರಿ, (109) ವೀಳ್ಯೆದೆಲೆ, (110) ಬೆಲ್ಲ, (111) ತೆಂಗಿನಕಡ್ಡಿ, (112) ಒಣದ್ರಾಕ್ಷಿ.

**ಅನುಸೂಚಿ**

ಟಿ.ನರಸೀಪುರ ಕಸಬಾ ಹೋಬಳಿ, ಭೈರಾಪುರ ಗ್ರಾಮಕ್ಕೆ ಸೇರಿದ ಈ ಕೆಳಕಂಡ ಸೀಮಾಬದ್ದ ಪ್ರದೇಶದ ಸರ್ವೆ ನಂ.68/2ಬಿ, 68/3ಎ, 68/3ಬಿ, 69/2ಬಿ, 69/3, 73/3ಬಿ, 74/1, 74/2 ರಲ್ಲಿ ಒಟ್ಟು 10 ಎಕರೆ ಸೀಮಾಬದ್ಧ ಸ್ಥಳ:

**ಪೂರ್ವಕ್ಕೆ:** ರಸ್ತೆ ಮತ್ತು ಅಂಬೇಡ್ಕರ್ ಭವನ

**ಪಶ್ಚಿಮಕ್ಕೆ:** ಸರ್ವೆ ನಂ.66ರ ಖಾಸಗಿ ಜಮೀನು

**ಉತ್ತರಕ್ಕೆ:** ಸರ್ವೆ ನಂ.71 ಮತ್ತು 72 ಖಾಸಗಿ ನಿವೇಶನಗಳು

**ದಕ್ಷಿಣಕ್ಕೆ:** ನಂಜನಗೂಡು–ಟಿ.ನರಸೀಪುರ ರಸ್ತೆ.

ಮೇಲಿನ ಉದ್ದೇಶಿತ ಪ್ರಸ್ತಾವದಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆ ಅಥವಾ ಸಲಹೆಗಳನ್ನು ಆಹ್ವಾನಿಸಲಾಗಿದೆ. ಆಕ್ಷೇಪಣೆಗಳು ಅಥವಾ ಸಲಹೆಗಳನ್ನು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರ ಮತ್ತು ಕನ್ನಡ ದಿನಪತ್ರಿಕೆ ಈ ಎರಡರಲ್ಲಿ ಯಾವುದರಲ್ಲಿ ತಡವಾಗಿ ಪ್ರಕಟವಾಗುವುದೋ ಆ ದಿನಾಂಕದಿಂದ 32 ದಿನಗಳ ಒಳಗಾಗಿ ಸಲ್ಲಿಸತಕ್ಕದ್ದು. ನಿಗದಿತ ಅವಧಿಯನ್ನು ಮೀರಿ ಸ್ವೀಕರಿಸಲ್ಪಡುವ ಆಕ್ಷೇಪಣೆಗಳು ಅಥವಾ ಸಲಹೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲವೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಆಕ್ಷೇಪಣೆ ಅಥವಾ ಸಲಹೆಗಳನ್ನು ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು–560 001 ಇವರ ವಿಳಾಸಕ್ಕೆ ಕಳುಹಿಸಿಕೊಡಬಹುದು.

**ಜಿ. ರಾಮಚಂದ್ರ**

ಪಿ.ಆರ್.702 ನಿರ್ದೇಶಕರು.

**ಸಾರಿಗೆ ಇಲಾಖೆ**

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳವರ ಕಛೇರಿ, ಚಿತ್ರದುರ್ಗ**

**ಪ್ರಕಟಣೆ**

**ಸಂಖ್ಯೆ:ಪ್ರಾಸಾಅ:ಚಿದು:ಡಿಎಸ್‌ಎ: ದಿನಾಂಕ:22ನೇ ಏಪ್ರಿಲ್, 2010**

**ವಿಷಯ:** ತೆರಿಗೆ ಹಾಗೂ ದಂಡ ಪಾವತಿಸದ–ವಾರಸುದಾರರು ಇಲ್ಲದ ವಾಹನಗಳ ಹರಾಜು ಮಾಡುವ ಬಗ್ಗೆ.

ಪ್ರಾದೇಶಿಕ ಸಾರಿಗೆ ಕಛೇರಿ, ಚಿತ್ರದುರ್ಗ ಜಿಲ್ಲಾ ವ್ಯಾಪ್ತಿಯಲ್ಲಿ ಮೋಟಾರು ವಾಹನ ನಿರೀಕ್ಷಕರು ತೆರಿಗೆ ಪಾವತಿಸದ ಹಾಗೂ ಇತರೆ ಅಪರಾಧಗಳಿಗೆ ಸಂಬಂಧಿಸಿದಂತೆ, ವಿವಿಧ ವರ್ಗದ ವಾಹನಗಳನ್ನು ತಪಾಸಣೆ ಮಾಡಿ ಜಿಲ್ಲೆಯ ಬೇರೆ ಬೇರೆ ತಾಲ್ಲೂಕು ಪೊಲೀಸ್ ಠಾಣೆಗಳಲ್ಲಿ ಹಾಗೂ ಕಛೇರಿಯ ಆವರಣದಲ್ಲಿ ವಾಹನಗಳನ್ನು ಮುಟ್ಟುಗೋಲು ಮಾಡಿ ನಿಲ್ಲಿಸಲಾಗಿದೆ.

ಪ್ರಕರಣಕ್ಕೆ ಸಂಬಂಧಿಸಿದಂತೆ ತೆರಿಗೆ ಹಾಗೂ ದಂಡ ಪಾವತಿಸಿ ವಾಹನಗಳನ್ನು ವಾಹನ ಚಾಲಕ: ಮಾಲೀಕರು ಬಿಡುಗಡೆ ಮಾಡಿಕೊಂಡಿರುವುದಿಲ್ಲ. ಈ ಬಗ್ಗೆ ವಾಹನ ಹರಾಜು ನೋಟೀಸನ್ನು ನೊಂದಾಯಿತ ಅಂಚೆ ಮೂಲಕ ನೀಡಲಾಗಿದೆ. ಕೆಲವು ವಾಹನಗಳ ನೋಟೀಸುಗಳು ಜಾರಿಯಾಗದೆ ಅಂಚೆ ಇಲಾಖೆಯ ಷರದೊಂದಿಗೆ ಮರಳಿ ಬಂದಿರುತ್ತವೆ.

ಪ್ರಯುಕ್ತ ಈ ಮಾಹಿತಿ ಪ್ರಕಟಿಸಿದ ದಿನಾಂಕದಿಂದ 30 ದಿವಸದೊಳಗಾಗಿ ಈ ಕೆಳಕಂಡ ವಾಹನದ ಮಾಲೀಕರು ಚಾಲಕರು ಮೂಲ ದಾಖಲಾತಿಗಳನ್ನು ಹಾಜರುಪಡಿಸಿ ವಾಹನದ ತೆರಿಗೆ ಮತ್ತು ದಂಡ ಪಾವತಿಸಿ ವಾಹನವನ್ನು ಬಿಡುಗಡೆ ಮಾಡಿಕೊಳ್ಳತಕ್ಕದ್ದು, ತಪ್ಪಿದಲ್ಲಿ ವಾಹನಗಳನ್ನು ಸಾರ್ವಜನಿಕ ಬಹಿರಂಗ ಹರಾಜು ಮಾಡಿ ಸರ್ಕಾರಕ್ಕೆ ಬರಬೇಕಾದ ತೆರಿಗೆ ಮತ್ತು ದಂಡ ಜಮಾ ಮಾಡಿಕೊಳ್ಳಲಾಗುವುದು ಎಂದು ಈ ಮೂಲಕ ತಿಳಿಯಪಡಿಸಿದೆ.

**ವಾಹನಗಳ ವಿವರ**

| | |
|---|---|
| 1) ಕೆಎ–20:132 | ಮ್ಯಾಕ್ಸಿಕ್ಯಾಬ್ |
| 2) ಕೆಎ–04:ಬಿ–39 | ಸರಕು ವಾಹನ |
| 3) ಕೆಎ–04:ಎ–7167 | ಸರಕು ವಾಹನ |
| 4) ಕೆಎ–05:ಎಬಿ–1651 | ಸರಕು ವಾಹನ |
| 5) ಎಂಇವಿ–3495 | ಆಟೋರಿಕ್ಷಾ |

| | |
|---|---|
| 6) ಸಿಎನ್‌ಎಸ್–4870 | ಆಟೋರಿಕ್ಷಾ |
| 7) ಕೆಎ–16:5037 | ಆಟೋರಿಕ್ಷಾ |
| 8) ಕೆಎ–16:4552 | ಆಟೋರಿಕ್ಷಾ |
| 9) ಕೆಎ–16:7894 | ಆಟೋರಿಕ್ಷಾ |
| 10) ಕೆಎ–16:8133 | ಆಟೋರಿಕ್ಷಾ |
| 11) ಒಆರ್–07:ಎ–7034 | ಮೋ.ಸೈಕಲ್ |
| 12) ಎಪಿ–37:5690 | ಮೋ.ಸೈಕಲ್ |
| 13) ಎಪಿ–05:ಕ್ಯೂ–5103 | ಮೋ.ಸೈಕಲ್ |
| 14) ಚಾಸಿ ನಂ.511791 | ಮೋ.ಸೈಕಲ್ |
| 15) ಚಾಸಿ ನಂ.496345 | ಮೋ.ಸೈಕಲ್ |
| 16) ಎಪಿ–16:ಎಕೆ–2354 | ಮೋ.ಸೈಕಲ್ |
| 17) ಚಾಸಿ ನಂ.286455 | ಮೋ.ಸೈಕಲ್ |
| 18) ಚಾಸಿ ನಂ.37176 | ಮೋ.ಸೈಕಲ್ |
| 19) ಕೆಎ–16:6198 | ಆಟೋರಿಕ್ಷಾ |
| 20) ಎಂಎಕ್ಸ್‌ಎಕ್ಸ್–9767 | ಸ್ಕೂಟರ್‌ಚೇತಕ್. |

ಪ್ರಾದೇಶಿಕ ಸಾರಿಗೆ
ಅಧಿಕಾರಿಗಳು, ಚಿತ್ರದುರ್ಗ.

ಪಿ.ಆರ್.685

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ: ಬೆಂಗಳೂರು(ಪೂರ್ವ) ಇಂದಿರಾನಗರ ಇವರ ನಡಾವಳಿಗಳು**

**ಹಾಜರಿದ್ದವರು:** ನಂಜರಾಜೇ ಅರಸು,
ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಇಂದಿರಾನಗರ,
ಬೆಂಗಳೂರು (ಪೂರ್ವ).

**ವಿಷಯ:** ಮೋಟಾರು ವಾಹನ ಸಂಖ್ಯೆ: ಕೆಎ–03–682(ಪಿಎಸ್‌ವಿ) ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ನೋಂದಣಿ ರದ್ದುಪಡಿಸಲು ಕೋರಿ ವಾಹನದ ಮಾಲೀಕರ ಅರ್ಜಿ ದಿನಾಂಕ:06.01.2010.

2) ವಾಹನವನ್ನು ಜಖಂಗೊಳಿಸಬಹುದೆಂಬ ವರದಿ ದಿನಾಂಕ:08.01.2010.

**ಪ್ರಸ್ತಾವನೆ:**

ಮೋಟಾರು ವಾಹನ ಸಂಖ್ಯೆ: ಕೆಎ–03–682 (ಪಿಎಸ್‌ವಿ) ಭಾರಿ ಖಾಸಗಿ ಪ್ರಯಾಣಿಕರ ಸೇವಾ ವಾಹನವನ್ನು ದಿನಾಂಕ:12.01.2010 ರಂದು ಶ್ರೀ ಎಂ.ಎಂ. ಶೆರೀಫ್, ಬಿನ್ ಲೇಟ್ ಮೊ.ಇಬ್ರಾಹಿಂ, ನಂ.79, ಹೆಚ್.ಎಸ್.ರಸ್ತೆ, ಬೆಂಗಳೂರು–5 ಇವರ ಹೆಸರಿಗೆ ಅಧ್ಯರ್ಪಣದ ಮುಂದುವರಿಕೆಯಲ್ಲಿಯೇ ವಾಹನ ಮಾಲೀಕತ್ವ ವರ್ಗಾವಣೆ ನಮೂದಿಸಿದ್ದು, ದಿನಾಂಕ:06.01.2010 ರಂದು ನೋಂದಣಿ ರದ್ಧತಿಗೆ ಅರ್ಜಿ ಸಲ್ಲಿಸಿರುತ್ತಾರೆ. ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ದಿನಾಂಕ:08.01.2010 ರಂದು ಸದರಿ ವಾಹನವನ್ನು ಪರಿಶೀಲಿಸಿ ಸದರಿ ವಾಹನವು 1989 ಮಾದರಿ ವಾಹನವಾಗಿದ್ದು, ದುರಸ್ಥಿ ಮಾಡಲಾಗದ ಹಿನ್ನಲೆಯಲ್ಲಿ ಪ್ರಸ್ತುತ ವಾಹನ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಲಾಗಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಪ್ರಾಸಾಪ್ರಾ: ಬೆಂಗಳೂರು(ಪೂರ್ವ):ನೋಂ:ಕೆಎ–03–682/09–10, ದಿನಾಂಕ:6ನೇ ಮಾರ್ಚ್, 2010**

ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ಅಧಿನಿಯಮ 55ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ನಂಜರಾಜೇ ಅರಸು, ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಪೂರ್ವ) ಆದ ನಾನು ವಾಹನದ ಸಂಖ್ಯೆ: ಕೆಎ–03–682(ಪಿಎಸ್‌ವಿ) ವಾಹನದ ನೋಂದಣಿ ಮತ್ತು ನೋಂದಣಿ ಪುಸ್ತಕವನ್ನು, ಸರ್ಕಾರಕ್ಕೆ ಸದರಿ ವಾಹನದಿಂದ ಯಾವುದೇ ಬೇಬಾಕಿ ಬಾಕಿಯಿದ್ದಲ್ಲಿ ವಾಹನದ ಮಾಲೀಕರು ಪಾವತಿಸತಕ್ಕದ್ದು, ಎಂಬ ನಿಬಂಧನೆಯೊಂದಿಗೆ ದಿನಾಂಕ:06.03.2010 ರಿಂದ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

| | | | |
|---|---|---|---|
| ವಾಹನದ ಸಂಖ್ಯೆ: | KA-03-682 | ವಾಹನದ ವರ್ಗ | PSV |
| ನೋಂದಣಿ ದಿನಾಂಕ: | 07.11.1990 | ಆಸನ ಸಾಮರ್ಥ್ಯ | 57+1 |
| ತಯಾರಕರು | Ashok Leyland | ಚಾಸಿಸ್ ಸಂಖ್ಯೆ | ALEM 221789 |
| ಇಂಜಿನ್ ಸಂ. | ALEM-98050 | ತಯಾರಾದ ವರ್ಷ | 1989 |
| ವಾಹನದ ಮಾಲೀಕರು | Sri M.M. Sharief, S/o Md Ibrahim (late), No.2/3, Plain Street, Infantry Road Cross, Bangalore. | | |

**ನಂಜರಾಜೇ ಅರಸು**

ಪಿ.ಆರ್.704

ನೋಂದಣಿ ಪ್ರಾಧಿಕಾರ ಹಾಗೂ
ಪ್ರಾದೇಶಿಕ ಸಾರಿಗೆ ಅಧಿಕಾರಿ.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1196 ಎಎಂಎಲ್2007:10–11/213, ದಿನಾಂಕ:22ನೇ ಏಪ್ರಿಲ್, 2010**

**ವಿಷಯ:** ಶ್ರೀ ಆರ್.ಬಾಬು ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೋಣಿಮಲೈ ರೇಂಜ್‌ನಲ್ಲಿ 90–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: DMG/1196 AML 07:17820-21 ದಿನಾಂಕ:12–03–2010

2. ಅರ್ಜಿದಾರರ ವಿವರಣೆ ದಿ:24–03–2010.

**ಪ್ರಸ್ತಾವನೆ:**

ಶ್ರೀ ಆರ್.ಬಾಬು ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೋಣಿಮಲೈ ರೇಂಜ್‌ನಲ್ಲಿ 90–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 1196 ಎಎಂಎಲ್ 2007 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶದ ನಕ್ಷೆಯು ಮಾಪನಕ್ಕನುಗುಣವಾಗಿರುವುದಿಲ್ಲ. ಸಲ್ಲಿಸಿರುವ ನಕ್ಷೆಯ ಪ್ರಕಾರ ಪ್ರಸ್ತುತ ಅರ್ಜಿದಾರರು ಕೋರಿರುವ ಪ್ರದೇಶವು ಶ್ರೀ V.S.Lad ರವರಿಗೆ P.L. ಮಂಜೂರಾಗಿದ್ದ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿದೆ. ಹಾಗೂ ಅರ್ಜಿದಾರರು ದಿನಾಂಕ:24–03–2010ರಂದು ನೀಡಿರುವ ವಿವರಣೆಯು ತೃಪ್ತಿಕರವಾಗಿಲ್ಲದಿರುವುದರಿಂದ, ಸದರಿ ಪ್ರದೇಶದಲ್ಲಿ ಗಣಿ ಗುತ್ತಿಗೆಗೆ ಅನುಮತಿ ನೀಡಲು ಅವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1196 ಎಎಂಎಲ್ 2007, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:354 ಎಎಂಎಲ್2007:10–11/214–15, ದಿನಾಂಕ: 22ನೇ ಏಪ್ರಿಲ್, 2010**

**ವಿಷಯ:** ಶ್ರೀ ಡಿ.ಎಸ್.ಹೂಲಗೇರಿ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 25.00 ಎಕರೆ ಪ್ರದೇಶದಲ್ಲಿ ಐರನ್ ಓರ್ ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:1.** ಈ ಕಛೇರಿ ಸೂಚನಾ ಪತ್ರ ಸಂಖ್ಯೆ: ಗಭೂಇ : ಗಗುಶಾ: 354 ಎಎಂಎಲ್ 07: 13197: ದಿನಾಂಕ:29–01–2009.

2. ಅರ್ಜಿದಾರರ ವಿವರಣೆ ದಿ:26–02–2009.

**ಪ್ರಸ್ತಾವನೆ:**

ಶ್ರೀ ಡಿ.ಎಸ್.ಹೂಲಗೇರಿ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 25.00 ಎಕರೆ ಪ್ರದೇಶದಲ್ಲಿ ಐರನ್ ಓರ್ ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 354 ಎಎಂಎಲ್ 2007 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಗಣಿಗುತ್ತಿಗೆ ಸಂ.2087 ಮತ್ತು 2580ರ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದೆ. ಸದರಿ ಪ್ರದೇಶವು ಅರ್ಜಿದಾರರ ಪಟ್ಟಾ ಜಮೀನಾಗಿದ್ದರೂ ಸಹ ಗಣಿಗುತ್ತಿಗೆ ಅರ್ಜಿಯನ್ನು ಪರಿಗಣಿಸಲು ನಿಯಮಗಳಲ್ಲಿ ಅವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 354 ಎಎಂಎಲ್ 2007, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:03 ಎಪಿಎಲ್ 95:10–11/ 1217 ದಿನಾಂಕ: 22ನೇ ಏಪ್ರಿಲ್, 2010**

**ವಿಷಯ:** ಮೆ: ಲಕ್ಷ್ಮಿ ಮಿನರಲ್ಸ್ ಇವರು ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ರಾಮಘಡ ಗ್ರಾಮದಲ್ಲಿ 110–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜ ಅನ್ವೇಷಣಾ ಲೈಸೆನ್ಸ್‌ಗಾಗಿ ಸಲ್ಲಿಸಿರುವ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: ಗಭೂಇ:ಗಗುಶಾ:03 ಎಎಂಎಲ್ 95 ದಿನಾಂಕ:18–05–1995.

2. ಅರ್ಜಿದಾರರ ವಿವರಣೆ ದಿ:24–10–2003.

**ಪ್ರಸ್ತಾವನೆ:**

ಮೆ: ಲಕ್ಷ್ಮಿ ಮಿನರಲ್ಸ್ ಇವರು ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ರಾಮಘಡ ಗ್ರಾಮದಲ್ಲಿ 110–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜ ಅನ್ವೇಷಣಾ ಲೈಸೆನ್ಸ್‌ಗಾಗಿ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ: 03 ಎಎಂಎಲ್ 2007 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆ ಅನ್ವೇಷಣಾ ಲೈಸೆನ್ಸ್‌ಗಾಗಿ ಕೋರಿರುವ ಪ್ರದೇಶದ ಅರ್ಜಿ ಜೊತೆ ಲಗತ್ತಿಸಿರುವ ನಕ್ಷೆಗಳು ಸರಿಯಿಲ್ಲದಿರುವುದರಿಂದ ತಿರಸ್ಕರಿಸಬಾರದೇಕೆ ಎಂದು MCR ನಿಯಮ 12(1)ರಡಿ ಸಮಜಾಯಿಷಿಯನ್ನು ಉಲ್ಲೇಖ (1)ರ ಈ ಕಛೇರಿ ಪತ್ರದಲ್ಲಿ ಕೇಳಲಾಗಿತ್ತು. ಅರ್ಜಿದಾರರು ತಮ್ಮ ವಿವರಣೆಯಲ್ಲಿ ಅನಾರೋಗ್ಯದ ನಿಮಿತ್ತ ಹಾಗೂ ಹಣಕಾಸಿನ ತೊಂದರೆಯಿಂದಾಗಿ ನಿಗದಿತ ಅವಧಿಯಲ್ಲಿ ಉತ್ತರಿಸಲು ಅನಾನುಕೂಲವಾಗಿರುವುದಾಗಿಯೂ, ಸದರಿ ಅಪೇಕ್ಷಿತ ಪ್ರದೇಶವು mineralized zone ಆಗಿರುವುದರಿಂದ ಗಣಿಗುತ್ತಿಗೆಗೆ ಅರ್ಜಿ ಹಾಕಲು ಅವಕಾಶ ಮಾಡಿಕೊಡಬೇಕೆಂದು ಕೋರಿರುತ್ತಾರೆ. ಆದರೆ, ಅರ್ಜಿದಾರರು ಸಕಾಲದಲ್ಲಿ ಉತ್ತರವನ್ನು ಸಲ್ಲಿಸಿರುವುದಿಲ್ಲವಾದ್ದರಿಂದ, ಮತ್ತು ಸದರಿ ರಾಮಘಡ ಪ್ರದೇಶದಲ್ಲಿ ಈಗಾಗಲೇ ಗಣಿಗುತ್ತಿಗೆಗಳಿಗೆ ಅನುಮತಿ ನೀಡಿದ್ದು, ಅನ್ವೇಷಣಾ ಲೈಸನ್ಸ್ ನೀಡಲು ಅವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಅನ್ವೇಷಣಾ ಲೈಸನ್ಸ್ ಅರ್ಜಿ ಸಂಖ್ಯೆ 03 ಎಎಂಎಲ್ 2007, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:499 ಎಎಂಎಲ್2007: 10–11/ 1199, ದಿನಾಂಕ: 22ನೇ ಏಪ್ರಿಲ್, 2010**

**ವಿಷಯ:** ಶ್ರೀ ಬಿ.ರುದ್ರ ಗೌಡ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, S.M.ಬ್ಲಾಕ್ ನಲ್ಲಿ 64–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: ಗಭೂಇ:ಗಗುಶಾ:499 ಎಎಂಎಲ್2007 ದಿನಾಂಕ:14–03–2007.

2. ಅರ್ಜಿದಾರರ ವಿವರಣೆ ದಿ:16–11–2007.

**ಪ್ರಸ್ತಾವನೆ:**

ಶ್ರೀ ಬಿ.ರುದ್ರ ಗೌಡ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, S.M.ಬ್ಲಾಕ್ ನಲ್ಲಿ 64–00ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 499 ಎಎಂಎಲ್ 2007 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಶ್ರೀ ಬಿ.ಕುಮಾರ್ ಗೌಡ ಇವರ ಗಣಿಗುತ್ತಿಗೆ ಪ್ರದೇಶ ಮತ್ತು ಪೂರ್ವ AML ಹಾಗೂ APL ಅರ್ಜಿಗಳ ಪ್ರದೇಶದ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ಸದರಿ ಪ್ರದೇಶದಲ್ಲಿ ಗಣಿಗುತ್ತಿಗೆ ಅರ್ಜಿಯನ್ನು ಪರಿಗಣಿಸಲು ಅವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 379 ಎಎಂಎಲ್ 2007, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:379 ಎಎಂಎಲ್2007: 10–11/1197, ದಿನಾಂಕ: 22ನೇ ಏಪ್ರಿಲ್, 2010**

**ವಿಷಯ:** ಮೆ:ಸನ್‌ವಿಕ್ ಸ್ಟೀಲ್ಸ್ ಪ್ರೈ.ಲಿ., ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಾಮಘಡ ಗ್ರಾಮದಲ್ಲಿ 122–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: ಗಭೂಇ:ಗಗುಶಾ:379 ಎಎಂಎಲ್2007 ದಿನಾಂಕ:30–10–2007.

2. ಅರ್ಜಿದಾರರ ವಿವರಣೆ ದಿ:19–11–2007.

**ಪ್ರಸ್ತಾವನೆ:**

ಮೆ:ಸನ್‌ವಿಕ್ ಸ್ಟೀಲ್ಸ್ ಪ್ರೈ.ಲಿ., ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಾಮಘಡ ಗ್ರಾಮದಲ್ಲಿ 122–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 379 ಎಎಂಎಲ್ 2007 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು MI No.1516 ರ ಪ್ರದೇಶಕ್ಕೆ ಹಾಗೂ ಇತರೆ ಪೂರ್ವ ಅರ್ಜಿಗಳಾದ 65 AML 98 ಮತ್ತು 35 AML 98ರ ಮೇಲೆ ಅತಿವ್ಯಾಪ್ತಿಯಾಗುತ್ತಿದ್ದು, ದಿನಾಂಕ:19–11–2007 ರಂದು ಅರ್ಜಿದಾರರು ನೀಡಿರುವ ವಿವರಣೆಯು ತೃಪ್ತಿಕರವಾಗಿಲ್ಲ. ಸದರಿ ಪ್ರದೇಶದಲ್ಲಿ ಗಣಿಗುತ್ತಿಗೆ ಅರ್ಜಿಯನ್ನು ಪರಿಗಣಿಸಲು ಅವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ:ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 379 ಎಎಂಎಲ್ 2007, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ಪಿ.ಆರ್.715 ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:241 ಎಎಂಎಲ್2007:10–11/1195, ದಿನಾಂಕ: 22ನೇ ಏಪ್ರಿಲ್, 2010**

**ವಿಷಯ:** ಶ್ರೀ ಅನಿಲ್ ಹೆಚ್.ಲಾಡ್, ಮೆ: VSL ಮೈನಿಂಗ್ ಕಂ.ಲಿ.,ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, NEB ರೇಂಜ್ ನಲ್ಲಿ 85.00 ಹೆಕ್ಟೇರ್ ಪ್ರದೇಶದಲ್ಲಿ ಐರನ್ ಓರ್ ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ಸೂಚನಾ ಪತ್ರ ಸಂಖ್ಯೆ: ಗಭೂಇ:ಗಗುಶಾ:241 ಎಎಂಎಲ್ 07: 13483: ದಿನಾಂಕ:03–02–2009.

2. ಅರ್ಜಿದಾರರ ವಿವರಣೆ ದಿ:19–02–2009.

**ಪ್ರಸ್ತಾವನೆ:**

ಶ್ರೀ ಅನಿಲ್ ಹೆಚ್.ಲಾಡ್, ಮೆ:VSL ಮೈನಿಂಗ್ ಕಂ.ಲಿ., ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, NEB ರೇಂಜ್ ನಲ್ಲಿ 85.00 ಹೆಕ್ಟೇರ್ ಪ್ರದೇಶದಲ್ಲಿ ಐರನ್ ಓರ್ ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 241 ಎಎಂಎಲ್ 2007ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಈಗಾಗಲೇ ಮೆ:ಪಿ.ಎಂ.ಮೈನ್ಸ್ & ಮಿನರಲ್ಸ್ ರವರಿಗೆ ಶಿಫಾರಿತಗೊಂಡಿರುವ ಪ್ರದೇಶವಾದ್ದರಿಂದ ಸದರಿ ಅರ್ಜಿಯನ್ನು ಪರಿಗಣಿಸಲು ಸ್ಥಳಾವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ:ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 241 ಎಎಂಎಲ್ 2007, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1020 ಎಎಂಎಲ್2006: 10–11/729, ದಿನಾಂಕ:19ನೇ ಏಪ್ರಿಲ್, 2010**

**ವಿಷಯ:** ಶ್ರೀ ನರಹರಿ ರೆಡ್ಡಿ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಚಿಕ್ಕನಾಥಪುರ ಗ್ರಾಮದ 1680.00 ಎಕರೆ ಪ್ರದೇಶದಲ್ಲಿ ಐರನ್ ಓರ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** ಈ ಕಛೇರಿ ಪತ್ರ ಸಂಖ್ಯೆ:ಗಭೂಇ: ಗಗುಶಾ: 1020 ಎಎಂಎಲ್ 06:5841: ದಿನಾಂಕ:06–08–2007.

**ಪ್ರಸ್ತಾವನೆ:**

ಶ್ರೀ ನರಹರಿ ರೆಡ್ಡಿ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಚಿಕ್ಕನಾಥಪುರ ಗ್ರಾಮದ 1680.00 ಎಕರೆ ಪ್ರದೇಶದಲ್ಲಿ ಐರನ್ ಓರ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 1020 ಎಎಂಎಲ್ 2006 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶದ ಅರ್ಜಿಯೊಂದಿಗೆ ಲಗತ್ತಿಸಲಾದ ನಕ್ಷೆಯು 1"=1.4 ಮೈಲಿ ಅಳತೆಯಲ್ಲಿದ್ದು, ಇಲಾಖೆಯಲ್ಲಿ ಅಳವಡಿಸಿರುವ ನಕ್ಷೆಯೊಂದಿಗೆ ತಾಳೆಯಾಗುತ್ತಿಲ್ಲ. ಆದ್ದರಿಂದ ಕೋರಲಾದ ಪ್ರದೇಶವನ್ನು ಮೂಲ ಗ್ರಾಮ ನಕ್ಷೆಯಲ್ಲಿ 1":660' ಅಥವಾ 1":1320' ರ ಅಳತೆಯಲ್ಲಿ ಗುರ್ತಿಸಿ, ಸಲ್ಲಿಸಿದಲ್ಲಿ ಅರ್ಜಿಯನ್ನು ಪರಿಗಣಿಸಲಾಗುವುದು ತಪ್ಪಿದಲ್ಲಿ ತಮ್ಮ ಅರ್ಜಿಯನ್ನು ತಿರಸ್ಕರಿಸಲಾಗುವುದು ಎಂದು ಉಲ್ಲೇಖ (1)ರ ಈ ಕಛೇರಿ ಪತ್ರದಲ್ಲಿ ಕೇಳಲಾಗಿತ್ತು. ಅರ್ಜಿದಾರರು ತಮ್ಮ ವಿವರಣೆಯನ್ನು ಈ ವರೆವಿಗೂ ಸಲ್ಲಿಸದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1020 ಎಎಂಎಲ್ 2006, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:906 ಎಎಂಎಲ್2006: 10–11/ 801 ದಿನಾಂಕ: 19ನೇ ಏಪ್ರಿಲ್, 2010**

**ವಿಷಯ:** ಶ್ರೀಮತಿ ಜ್ಯೋತಿ ಎನ್.ಗುಡೇಕೋಟೆ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಯಶವಂತನಗರ ಗ್ರಾಮದ 4–15 ಎಕರೆ ಪ್ರದೇಶದಲ್ಲಿ ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:**1. ಈ ಕಛೇರಿ ಸೂಚನಾ ಪತ್ರ ಸಂಖ್ಯೆ: ಗಭೂಇ:ಗಗುಶಾ: 906 ಎಎಂಎಲ್ 06: 1373: ದಿನಾಂಕ:04–05–2007.

2. ಅರ್ಜಿದಾರರ ವಿವರಣೆ ದಿ:19–03–2010.

**ಪ್ರಸ್ತಾವನೆ:**

ಶ್ರೀಮತಿ ಜ್ಯೋತಿ ಎನ್.ಗುಡೇಕೋಟೆ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಯಶವಂತನಗರ ಗ್ರಾಮದ 4–15 ಎಕರೆ ಪ್ರದೇಶದಲ್ಲಿ ಮ್ಯಾಂಗನೀಸ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ: 906 ಎಎಂಎಲ್ 2006 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶದ ವಿಸ್ತೀರ್ಣವು 4–15 ಎಕರೆಗಳಿದ್ದು, MCR ನಿಯಮ 1960ರ ನಿಯಮ 22D(C) ಪ್ರಕಾರ 4.00 ಹೆಕ್ಟೇರ್ ಪ್ರದೇಶಕ್ಕಿಂತ ಮೇಲ್ಪಟ್ಟಿರಬೇಕೆಂದಿರುವುದರಿಂದ ತಮ್ಮ ಅರ್ಜಿಯನ್ನು ತಿರಸ್ಕರಿಸಬಾರದೇಕೆ ಎಂದು MCR ನಿಯಮ 26(1)ರಡಿ ಸಮಜಾಯಿಷಿಯನ್ನು ಉಲ್ಲೇಖ (1)ರ ಈ ಕಛೇರಿ ಪತ್ರದಲ್ಲಿ ಕೇಳಲಾಗಿತ್ತು. ಅರ್ಜಿದಾರರು ತಮ್ಮ ವಿವರಣೆಯಲ್ಲಿ ಸದರಿ ಗಣಿಗುತ್ತಿಗೆ ಪ್ರದೇಶವು ತಮ್ಮದೇ ಪಟ್ಟಾ ಜಮೀನೆಂದು ತಿಳಿಸಿ, ತಮ್ಮ ಹೆಸರಿನಲ್ಲಿ ರಿಜಿಸ್ಟ್ರರಾಗಿರುವುದರಿಂದ ತಾವೇ ಅದರ ಮಾಲೀಕರೆಂದು ತಿಳಿಸಿ, ಗಣಿಗಾರಿಕೆಯನ್ನು manual ಆಗಿ ನಡೆಸಲು ಇಚ್ಛಿಸಿರುವುದಾಗಿ ತಿಳಿಸಿರುತ್ತಾರೆ.

ಆದರೆ, ಅರ್ಜಿದಾರರು ನೀಡಿರುವ ವಿವರಣೆಯು ತೃಪ್ತಿಕರವಾಗಿಲ್ಲದಿರುವುದರಿಂದ, ಸದರಿ ಪ್ರದೇಶದಲ್ಲಿ ಗಣಿ ಗುತ್ತಿಗೆ ಗೆ ಅನುಮತಿ ನೀಡಲು ಅವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 906 ಎಎಂಎಲ್ 2006, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ,ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:497 ಎಎಂಎಲ್2007: 10–11/799, ದಿನಾಂಕ: 19ನೇ ಏಪ್ರಿಲ್, 2010**

**ವಿಷಯ:** ಶ್ರೀ ಬಿ.ಕುಮಾರ ಗೌಡ & ಸನ್ಸ್ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಎಸ್.ಎಂ. ಬ್ಲಾಕ್ ನಲ್ಲಿ 64–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ಸೂಚನಾ ಪತ್ರ ಸಂಖ್ಯೆ: ಗಭೂಇ : ಗಗುಶಾ:4 97 ಎಎಂಎಲ್ 07: 13193: ದಿನಾಂಕ:22–01–2009.

2. ಅರ್ಜಿದಾರರ ವಿವರಣೆ ದಿ:02–03–2009.

**ಪ್ರಸ್ತಾವನೆ:**

ಶ್ರೀ ಬಿ.ಕುಮಾರ ಗೌಡ & ಸನ್ಸ್ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಎಸ್.ಎಂ ಬ್ಲಾಕ್ ನಲ್ಲಿ 64–00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಸಂಖ್ಯೆ:497 ಎಎಂಎಲ್ 2007 ಅನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಪೂರ್ವ ಅರ್ಜಿಗಳಿಗೆ ಮತ್ತು ಶ್ರೀ ಬಿ.ಕುಮಾರ ಗೌಡರವರು ಹೊಂದಿರುವ ಗಣಿಗುತ್ತಿಗೆ ಸಂ.2516 ಹಾಗೂ 148 ಎಪಿಎಲ್ 93 ಗೆ ಅತಿವ್ಯಾಪ್ತಿ ಆಗುತ್ತಿದ್ದು, ಅರ್ಜಿದಾರರು ದಿನಾಂಕ: 02–03–2009ರಂದು ನೀಡಿರುವ ವಿವರಣೆಯು ತೃಪ್ತಿಕರವಾಗಿಲ್ಲದಿರುವುದರಿಂದ, ಸದರಿ ಪ್ರದೇಶದಲ್ಲಿ ಗಣಿ ಗುತ್ತಿಗೆಗೆ ಅನುಮತಿ ನೀಡಲು ಅವಕಾಶ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995ರನ್ವಯ ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 497 ಎಎಂಎಲ್ 2007, ಅರ್ಜಿಯನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ಪಿ.ಆರ್.716 ನಿರ್ದೇಶಕರು.

